# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : **927**
ಸದಸ್ಯರ ಹೆಸರು : ಶ್ರೀ ಮಾನೆ ಶ್ರೀನಿವಾಸ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20.09.2021
ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಿದ್ಯುತ್ ಕಂಪನಿಗಳು ರೈತರ ಕೊಳವೆ ಬಾವಿಗಳಿಗೆ ವಿದ್ಯುತ್‌ನ್ನು ಪೂರೈಸಲು ಹೊಸ ಟಿ.ಸಿ.ಗಳನ್ನು ಮತ್ತು ಹೊಸ ಸಂಪರ್ಕಗಳನ್ನು ಪಡೆಯಲು ಅನುಸರಿಸಬೇಕಾಗಿರುವ ಕ್ರಮಗಳೇನು: | ರಾಜ್ಯದ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಸರ್ಕಾರದ ಆದೇಶ ಸಂಖ್ಯೆ ಇಎನ್ 41 ವಿಎಸ್‌ಸಿ 2014/ಪಿ1 ದಿನಾಂಕ:14-07-2014 ರನ್ವಯ ಅಕ್ರಮ-ಸಕ್ರಮ ಹಾಗೂ ಹೊಸದಾಗಿ ನೊಂದಾಯಿಸಲ್ಪಡುವ ಪಂಪ್‌ಸೆಟ್‌ಗಳು ಎಂಬ ಬೇಧವಿಲ್ಲದೇ ಎಲ್ಲಾ ನೀರಾವರಿ ಪಂಪ್‌ಸೆಟ್‌ಗಳ ಅರ್ಜಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿದೆ:<br><br>• ದಿನಾಂಕ: 31.07.2012 ರ ನಂತರ ಅನಧಿಕೃತವಾಗಿ ಸೇರ್ಪಡೆಗೊಂಡು ನೋಂದಾಯಿಸಿರುವ ಮತ್ತು ಹೊಸದಾಗಿ ನೊಂದಾಯಿಸಲ್ಪಡುವ ಪಂಪ್‌ಸೆಟ್‌ಗಳ ಅರ್ಜಿದಾರರು ರೂ.10,000/- ಮತ್ತು ಇತರೆ ಠೇವಣಿಗಳನ್ನು ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸುವುದು.<br>• ರೈತರ ಕೃಷಿ ಪಂಪ್‌ಸೆಟ್‌ಗಳ ವಿದ್ಯುತ್ ಸಂಪರ್ಕಕ್ಕೆ ನಿಗದಿತ ದಾಖಲೆ ಪತ್ರಗಳೊಂದಿಗೆ ಅರ್ಜಿ ನೋಂದಾಯಿಸಿದ ನಂತರ ಅಧಿಕಾರಿಗಳು ಸ್ಥಳ ಪರಿಶೀಲನೆ ನಡೆಸಿ, ನಿಗದಿತ ಶುಲ್ಕಗಳನ್ನು ಪಾವತಿಸಿಕೊಂಡು ಹತ್ತಿರ ಇರುವ ವಿದ್ಯುತ್ ಮಾರ್ಗದ ಲಭ್ಯತೆ ಮತ್ತು ಪರಿವರ್ತಕದ ಹೊರೆಯನ್ನು ಪರಿಶೀಲಿಸಿ ತಾಂತ್ರಿಕ ಸಾಧ್ಯತೆಗೆ ಅನುಗುಣವಾಗಿ ಜೇಷ್ಠತೆ ಆಧಾರದಲ್ಲಿ, ಸಾಧ್ಯವಿದ್ದಲ್ಲಿ ಸರ್ವಿಸ್ ಮೈನ್ ಮುಖಾಂತರ ಹಾಗೂ ಮೂಲಭೂತ ಸೌಕರ್ಯ ರಚನೆ ಅವಶ್ಯಕತೆ ಇರುವಲ್ಲಿ ವಿದ್ಯುತ್ ಮಾರ್ಗ ಹಾಗೂ ಪರಿವರ್ತಕಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು.<br><br>**ಶೀಘ್ರ ಸಂಪರ್ಕ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸುವುದು.**<br>• ಹೊಸದಾಗಿ ಅರ್ಜಿ ನೊಂದಾಯಿಸುವ ರೈತರು ರೂ.10,000/- ಮತ್ತು ಠೇವಣಿ ಹಣವನ್ನು ಪಾವತಿಸುವುದು.<br>• ರೈತರು ಇಚ್ಛಿಸಿದಲ್ಲಿ ಸ್ವಯಂ ಕಾರ್ಯ ನಿರ್ವಹಣಾ ಯೋಜನೆಯಡಿಯಲ್ಲಿ ಮೂಲ ಸೌಕರ್ಯ ರಚಿಸಿಕೊಳ್ಳುವುದು.<br>• ಪರಿವರ್ತಕ ಅಗತ್ಯವಿದ್ದಲ್ಲಿ ವಿದ್ಯುತ್ ಸರಬರಾಜು ಕಂಪನಿಗಳ ವತಿಯಿಂದ 25 ಕೆವಿಎ ಪರಿವರ್ತಕವನ್ನು ಒದಗಿಸಲಾಗುವುದು.<br>• ಮೂಲ ಸೌಕರ್ಯ ರಚನೆಯ ಮಾರ್ಗ ವಿಸ್ತರಣೆ ಕಾಮಗಾರಿಗಳಿಗೆ ಮೇಲ್ವಿಚಾರಣಾ ಶುಲ್ಕವನ್ನು ಮನ್ನಾ ಮಾಡಲಾಗುವುದು. |

| | | |
|---|---|---|
| ಆ) | ರಾಜ್ಯದಲ್ಲಿ ವಿದ್ಯುತ್ ಕಂಪನಿಗಳು ರೈತರ ಕೊಳವೆ ಬಾವಿಗಳಿಗೆ ವಿದ್ಯುತ್‌ನ್ನು ಪೂರೈಸಲು ಹೊಸ ಟಿ.ಸಿ.ಗಳನ್ನು ಮತ್ತು ಹೊಸ ಸಂಪರ್ಕಗಳನ್ನು ಪಡೆಯಲು ಗುತ್ತಿಗೆದಾರರು ನಿಗದಿಪಡಿಸುತ್ತಿರುವ ಬೆಲೆಗಳೆಷ್ಟು : | ರೈತರ ನೀರಾವರಿ ಪಂಪ್ ಸೆಟ್ಟುಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಅಗತ್ಯವಿರುವೆಡೆಯಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಟೆಂಡರ್ ಕರೆದು, ಕಾಮಗಾರಿಗಳನ್ನು ಗುತ್ತಿಗೆ ನೀಡಲಾಗುತ್ತಿದ್ದು, ವಹಿಸಲಾದ ಕಾಮಗಾರಿಗಳು ಪೂರ್ಣಗೊಂಡ ನಂತರ ಗುತ್ತಿಗೆದಾರರಿಗೆ ಡಿ.ಡಬ್ಲ್ಯೂ.ಎ. ನಲ್ಲಿ ನಿಗದಿಪಡಿಸಲಾದ ದರದನ್ವಯ ಕಂಪನಿಯ ವತಿಯಿಂದ ಹಣ ಪಾವತಿಸಲಾಗುವುದು. |
| ಇ) | ಗುತ್ತಿಗೆದಾರರು ನಿಗದಿಪಡಿಸುವ ಬೆಲೆಗಳನ್ನು ನೀಡಲಾಗಿದೇ ರೈತರು ಸಂಕಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ : | ಕೆ.ಟಿ.ಪಿ.ಪಿ.ಯ ನಿಯಮಾನುಸಾರ ಟೆಂಡರನ್ನು ಕರೆದು ದರಗುತ್ತಿಗೆಯ ಪ್ರಕಾರ ಗುತ್ತಿಗೆದಾರರಿಗೆ ಬಿಲ್ ಗಳ ಮೊತ್ತವನ್ನು ಕಂಪನಿ ವತಿಯಿಂದಲೇ ಪಾವತಿ ಮಾಡಲಾಗುತ್ತದೆ. ಆದ್ದರಿಂದ ರೈತರು ಗುತ್ತಿಗೆದಾರರಿಗೆ ಯಾವುದೇ ಹಣವನ್ನು ನೀಡುವ ಅವಶ್ಯಕತೆಯಿರುವುದಿಲ್ಲ.. |
| ಈ) | ಹೊಸ ಟಿ.ಸಿ ಗಳನ್ನು ಮತ್ತು ಹೊಸ ಸಂಪರ್ಕಗಳನ್ನು ಪಡೆಯಲು ಸರ್ಕಾರ ಸೂಕ್ತ ಬೆಲೆಯನ್ನು ನಿಗದಿಪಡಿಸಬಹುದೇ : ಇದಕ್ಕೆ ಬೇಕಾಗುವ ಕಾಲಾವಕಾಶವೆಷ್ಟು ? | ಕರ್ನಾಟಕ ಸರ್ಕಾರದ ಅಧಿಸೂಚನೆ ದಿನಾಂಕ: 14-7-2014ರ ಆದೇಶದನ್ವಯ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕಗಳನ್ನು ಪಡೆಯಲು ರೈತರು ಪಾವತಿಸಬೇಕಾಗಿರುವ ಠೇವಣಿ ಮತ್ತು ಇತರೆ ಶುಲ್ಕಗಳ ವಿವರಗಳು ಕೆಳಕಂಡಂತಿವೆ:-<br>1. ಅರ್ಜಿ ನೋಂದಣಿ ಶುಲ್ಕ : ರೂ.50/-<br>2. ಮೂಲಭೂತ ಸೌಕರ್ಯ ಶುಲ್ಕ : ರೂ. 10,000/-<br>3. ಭದ್ರತಾ ಠೇವಣಿ ಶುಲ್ಕ (ಪ್ರತಿ ಹೆಚ್.ಪಿ.ಗೆ) :<br>ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಭದ್ರತಾ ಠೇವಣಿಯು ಕೆಳಕಂಡಂತಿದೆ: |

| ಬೆಸ್ಕಾಂ | ಮೆಸ್ಕಾಂ | ಸೆಸ್ಕ್ | ಹೆಸ್ಕಾಂ | ಜೆಸ್ಕಾಂ |
|---|---|---|---|---|
| ರೂ.1290/- | ರೂ.1160/- | ರೂ.1230/- | ರೂ.2082/- (ತ್ರೈಮಾಸಿಕ ರೀಡಿಂಗ್ ಇದ್ದಲ್ಲಿ), ರೂ.1388/- (ಮಾಸಿಕ ರೀಡಿಂಗ್ ಇದ್ದಲ್ಲಿ) | ರೂ.1260/- |

ಠೇವಣಿ ಮೊತ್ತ ಮತ್ತು ಇತರೆ ಶುಲ್ಕಗಳನ್ನು ಪಾವತಿಸಿದ ನಂತರ ಜೇಷ್ಠತೆಯ ಆಧಾರದಲ್ಲಿ ಮೂಲಭೂತ ಸೌಕರ್ಯವನ್ನು ರಚಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು.

ಸಂಖ್ಯೆ: ಎನರ್ಜಿ 227 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ
ಮತ್ತು ಸಂಸ್ಕೃತಿ ಸಚಿವರು